ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಹೆದ್ದಾರಿ ಅಭಿವೃದ್ಧಿ

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) -

177 (1300) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಮಾಜ ಕಲ್ಯಾಣ ಮತ್ತು ಲೋಕೋಪಯೋಗಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಚಿಕ್ಕಮಗಳೂರು-ಕಡೂರು ಹೆದ್ದಾರಿಯನ್ನು ಅಭಿವೃದ್ಧಿ ಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಎಷ್ಟು ಕಿಲೋಮೀಟರ್ ಅಭಿವೃದ್ಧಿ ಪಡಿಸಲಾಗುತ್ತಿದೆ ; ಅಂದಾಜಿಸಿರುವ ವೆಚ್ಚ ; ಈಗಾಗಲೇ ಬಿಡುಗಡೆಯಾಗಿರುವ ಮೊತ್ತ ; ಬಾಕಿ ಮೊತ್ತದ ವಿವರ ಒದಗಿಸುವುದು ;

(ಇ) ರಸ್ತೆ ಅಭಿವೃದ್ಧಿ ಕೈಗೊಳ್ಳುವ ಸಮಯದಲ್ಲಿ ಬದಿಯಲ್ಲಿದ್ದ ಮರಗಳನ್ನು ಕಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಬಂದಿದ್ದಲ್ಲಿ, ರಸ್ತೆ ಅಭಿವೃದ್ಧಿಗಾಗಿ ಎಷ್ಟು ವಿವಿಧ ಜಾತಿಯ ಮರಗಳನ್ನು ಕಡಿಯಲಾಗಿದೆ ಹಾಗೂ ಎಷ್ಟು ಬೆಲೆಗೆ ಮಾರಾಟ ಮಾಡಲಾಗಿದೆ ; ಯಾವ ರೀತಿ ಬೆಲೆ ನಿಗಧಿಪಡಿಸಿ ಮಾರಾಟ ಮಾಡಲಾಗಿದೆ ; (ವಿವರ ಒದಗಿಸುವುದು)

(ಉ) ರಸ್ತೆ ಅಭಿವೃದ್ಧಿ ನಂತರ ಎಷ್ಟು ಗಿಡಗಳನ್ನು ಹೊಸದಾಗಿ ನೆಡಲಾಗಿದೆ ; ಇದಕ್ಕಾಗಿ ಯಾವ ರೀತಿಯ ಕ್ರಮ ವಹಿಸಲಾಗಿದೆ ? (ವಿವರ ಒದಗಿಸುವುದು)